ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೧೬ (ಆಶ್ವಯುಜ ೨೮, ಶಕ ವರ್ಷ ೧೯೩೮)<br>Bengaluru, Thursday, October 20, 2016 (Aashwayuja 28, Shaka Varsha 1938) | ಸಂಚಿಕೆ ೪೧<br>Issue 41 |
|---|---|---|


# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** 2016–17ನೇ ಸಾಲಿನಲ್ಲಿ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ತ್ರಿಪಕ್ಷೀಯ ಹೊಂದಾಣಿಕೆಯ (Tripartite Adjustment) ಮೂಲಕ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15–03–2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04–09–2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016, ದಿನಾಂಕ: 07–05–2016, 31.05.2016, 27.06.2016 ಮತ್ತು 18.07.2016.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 25 ಪಿಎಸ್‌ಆರ್ 2016/ಪಿ3, ದಿನಾಂಕ: 19–05–2016 (TA) ಮತ್ತು 20.06.2016 (TA)
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 37 ಪಿಎಸ್‌ಆರ್ 2016, ದಿನಾಂಕ: 06–06–2016.
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2016, ದಿನಾಂಕ: 20–06–2016.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ" ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ: 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಕರ್ನಾಟಕ ವಿದ್ಯುಚ್ಛಕ್ತಿ ವಲಯದ ಕಂಪನಿಗಳಾದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಹಾಗೂ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆಯನ್ನು ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನದ ಬಾಬ್ತಿಗೆ ವರ್ಷಾವಾರು ಸರಿಹೊಂದಿಸುವ ನೀತಿ ಮೊದಲಿನಿಂದಲೂ ವಾಡಿಕೆಯಲ್ಲಿದೆ.
4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2016ರ ದರ ಆದೇಶದಲ್ಲಿ 2016–17ನೇ ಸಾಲಿಗೆ ₹. 8,837.81 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನವನ್ನಾಗಿ ಬಿಡುಗಡೆ ಮಾಡಲು ನಿಗಧಿಪಡಿಸಿದೆ.
5. ಮೇಲೆ ಓದಲಾದ ಕ್ರಮಾಂಕ–(3), (4) ಮತ್ತು (5)ರಲ್ಲಿನ ಸರ್ಕಾರಿ ಆದೇಶಗಳ 2016–17ನೇ ಸಾಲಿಗೆ ಈವರೆವಿಗೆ ಸಹಾಯಧನ ₹. 1,882.00 ಕೋಟಿಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಿದೆ.

ರೂ. ಕೋಟಿಗಳು

| | |
|---|---|
| 2016–17ನೇ ಸಾಲಿಗೆ ಆಯೋಗ ಅನುಮೋದಿಸಿರುವ ₹. 7199, ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 1,680.00 |
| ತ್ರಿಪಕ್ಷೀಯ ಹೊಂದಾಣಿಕೆ – ಏಪ್ರಿಲ್ 2016 ರಿಂದ ಮೇ 2016ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 200.00 |
| 2016–17ನೇ ಸಾಲಿಗೆ ಶ್ರೀ ಸತ್ಯ ಸಾಯಿ ಆಸ್ಪತ್ರೆಗೆ ಸಹಾಯಧನ | 2.00 |
| **ಒಟ್ಟು** | **1,882.00** |

6. ಮೇಲಿನ ಕ್ರ.ಸಂ–6ರಲ್ಲಿ ಓದಲಾದ ಆದೇಶದಲ್ಲಿ 2016–17ನೇ ಸಾಲಿನ ಆಯವ್ಯಯದಲ್ಲಿ ಯೋಜನೇತರ ಮತ್ತು ಯೋಜನೆಗಳಿಗೆ ಒದಗಿಸಿರುವ ಮೊತ್ತವನ್ನು ಮೊದಲ ನಾಲ್ಕು ತಿಂಗಳುಗಳಿಗೆ ಬಿಡುಗಡೆ ಮಾಡಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.
7. 2016–17ನೇ ಸಾಲಿನ ಜೂನ್ 2016ರ ಮಾಹೆಗೆ ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಸರ್ಕಾರಕ್ಕೆ ಪಾವತಿಸಬೇಕಾದ ವಿದ್ಯುತ್ ತೆರಿಗೆ ಹಾಗೂ ರಾಜಧನವನ್ನು ಈ ಕೆಳಗೆ ವಿವರಿಸಿರುವಂತೆ ತ್ರಿಪಕ್ಷೀಯ ಹೊಂದಣಿಕೆ (Tripartite Adjustment) ಮೂಲಕ ಸರ್ಕಾರ ವಿದ್ಯುತ್ ಸರಬರಾಜು ಕಂಪನಿಗಳಿಗೆ ನೀಡಬೇಕಾಗಿರುವ ಸಹಾಯಧನಕ್ಕೆ ಹೊಂದಾಣಿಕೆ ಮೂಲಕ ಸರಿಹೊಂದಿಸಲು ಪ್ರಸ್ತಾಪಿಸಿದೆ.

**ರೂ. ಕೋಟಿಗಳಲ್ಲಿ**

| ಕ್ರ.ಸಂ. | ವಿಸಕಂ | ಜೂನ್ 2016 |
|---|---|---|
| 1 | ಬೆವಿಕಂ | 62.60 |
| 2 | ಮವಿಕಂ | 8.43 |
| 3 | ಹುವಿಕಂ | 10.10 |
| 4 | ಗುವಿಕಂ | 9.39 |
| 5 | ಚಾವಿಸನಿನಿ | 7.00 |
| 6 | ಕವಿನಿನಿ | 0.69 |
| | **ಒಟ್ಟು** | **98.21** |
| 7 | ಕವಿನಿನಿ (ರಾಜಧನ) | 1.79 |
| | **ಒಟ್ಟು** | **100.00** |

(ಬೆವಿಕಂ ಹೊಂದಾಣಿಕೆಯ ₹. 62.60 ಕೋಟಿಗಳಲ್ಲಿ ಮೇ 2016ನೇ ಮಾಹೆಯ ಬಾಕಿ ತೆರಿಗೆ ₹. 19.88 ಕೋಟಿಗಳು ಒಳಗೊಂಡಿದೆ.)

8. ಮೇಲೆ ವಿವರಿಸಿರುವಂತೆ, ಜೂನ್ 2016ರ ಮಾಹೆಯಲ್ಲಿ ವಸೂಲಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ಮೊತ್ತದ ಬಾಬ್ತು ರೂ. 100.00 ಕೋಟಿಗಳನ್ನು ತ್ರಿಪಕ್ಷೀಯ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ. ಆದ್ದರಿಂದ, ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 25 ಪಿಎಸ್‌ಆರ್ 2016/ಪಿ3 ಬೆಂಗಳೂರು, ದಿನಾಂಕ : 25–07–2016.**

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಬಾಬ್ತು **₹. 97.52 ಕೋಟಿಗಳನ್ನು (ತೊಂಭತ್ತೇಳು ಕೋಟಿ ಐವತ್ತೆರಡು ಲಕ್ಷ ರೂ.ಗಳು ಮಾತ್ರ)** ವಿದ್ಯುತ್ ಸರಬರಾಜು ಕಂಪನಿಗಳು 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಸರಿಹೊಂದಿಸಿ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ.

**A: ESCOM's PORTION** **(₹. in Crs)**

| DEBIT | | CREDIT | |
|---|---|---|---|
| **Head of Account** | **Amount** | **Head of Account** | **Amount** |
| **Subsidy to ESCOMs** | | **Electricity Tax collection** | |
| 2801-80-101-1-04-106 | | 0043-00-101-0-01 | |
| BESCOM | 62.60 | BESCOM | 62.60 |
| MESCOM | 8.43 | MESCOM | 8.43 |
| HESCOM | 10.10 | HESCOM | 10.10 |
| GESCOM | 9.39 | GESCOM | 9.39 |
| CESC | 7.00 | CESC | 7.00 |
| **Total** | **97.52** | **Total** | **97.52** |

ಬೆವಿಕಂ ಹೊಂದಾಣಿಕೆಯ ₹. 62.60 ಕೋಟಿಗಳಲ್ಲಿ ಮೇ 2016ನೇ ಮಾಹೆಯ ಬಾಕಿ ತೆರಿಗೆ ₹. 19.88 ಕೋಟಿಗಳು ಒಳಗೊಂಡಿದೆ.

2. 2016–17ನೇ ಸಾಲಿನ ಜೂನ್ 2016ರ ಮಾಹೆಗೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ವಿದ್ಯುತ್ ತೆರಿಗೆ ಮತ್ತು ರಾಜಧನ ರೂ. 2.48 ಕೋಟಿಗಳನ್ನು ಸಹ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಪಾವತಿಸಬೇಕಾಗಿರುವ ಸಹಾಯಧನಕ್ಕೆ ಕೆಳಗಿನ ಕೋಷ್ಠಕದಲ್ಲಿರುವಂತೆ ತ್ರಿಪಕ್ಷೀಯ ಹೊಂದಾಣಿಕೆಯ ಮೂಲಕ ಬಿಡುಗಡೆ ಮಾಡಿ ಆದೇಶಿಸಿದೆ. ಕವಿನಿನಿ ಮತ್ತು ಗುವಿಕಂ ಸಂಸ್ಥೆಗಳು ವಿದ್ಯುತ್ ಖರೀದಿ ಅಸಲಿಗೆ ಲೆಕ್ಕೀಕರಿಸಲು ಆದೇಶಿಸಿದೆ.

**B: KPCL Portion** (₹. in Crs)

| DEBIT | | CREDIT | |
|---|---|---|---|
| **Head of Account** | **Total Amount** | **Head of Account** | **Total Amount** |
| Subsidy to ESCOMs | | **Royality from KPCL** | |
| 2801-80-101-1-04-106 | | 0801-01-201-0-01 | 1.79 |
| GESCOM | 2.48 | | |
| | | **Electricity Tax** | |
| (KPCL to adjust this receipt against power purchase cost of GESCOM) | | 0043-00-101-0-01 | 0.69 |
| **Total-(B)** | **2.48** | **Total-(B)** | **2.48** |

3. ಲೆಕ್ಕ ಮಹಾಪರಿಶೋಧಕರು ಈ ಹೊಂದಾಣಿಕೆಗಳನ್ನು ಸಂಪೂರ್ಣವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಕೋರಿದೆ. ಈ ಆದೇಶದ ಪ್ರಕಾರ ಯಾವುದೇ ನಗದು ಬಿಡುಗಡೆ ಇರುವುದಿಲ್ಲ.
4. ಈ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಮತ್ತು ಮುಖ್ಯ ವಿದ್ಯುತ್ ಪರಿವೀಕ್ಷಕರು ಆ ಸಂಸ್ಥೆಗಳ ದಸ್ತಾವೇಜುಗಳಲ್ಲಿ ಸಮರ್ಪಕ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರಕ್ಕೆ ಪಾವತಿಸಬೇಕಾಗಿರುವ ತೆರಿಗೆ ಮತ್ತು ರಾಜಸ್ವ ₹. 2.48 ಕೋಟಿಗಳನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಸಹಾಯಧನವಾಗಿ ಸರಿಹೊಂದಿಸಲು ಸೂಚಿಸಿದೆ. ಈ ಮೊತ್ತವನ್ನು ವಿದ್ಯುತ್ ಖರೀದಿ ಅಸಲು ವೆಚ್ಚಕ್ಕೆ ಲೆಕ್ಕೀಕರಿಸುವುದು.
6. ಈ ಆದೇಶದಲ್ಲಿ ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಿರುವ ಸಹಾಯಧನವನ್ನು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಸಹಾಯಧನ ಬಾಬ್ತಿಗೆ ಬಿಡುಗಡೆ ಮಾಡಿದೆ ಎಂದು ಪರಿಗಣಿಸುವುದು.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 170ವೆಚ್ಚ–1/16, ದಿನಾಂಕ 03.05.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**PR-571**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಇಲಾಖೆಯ ಸಚಿವಾಲಯದಲ್ಲಿ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಅನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ಬೆಂಗಳೂರು, ದಿನಾಂಕ: 22.06.2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 14.03.2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 22.06.2016ರ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶಗಳಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22.06.2016ರ ಆದೇಶದ ಆದೇಶ ಭಾಗದ ಕಂಡಿಕೆ 1(1)ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ನಂತರದ ಅಧಿಕಾರಿಯನ್ನು (Chief Vigilance Officer) ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಜಲಸಂಪನ್ಮೂಲ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಜಸಂಇ 99 ಸೇಇವಿ 2016, ಬೆಂಗಳೂರು, ದಿನಾಂಕ : 12–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಗೆ ಸಂಬಂಧಿಸಿದಂತೆ, ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು), ಕರ್ನಾಟಕ ಸರ್ಕಾರ ಸಚಿವಾಲಯ, ಜಲಸಂಪನ್ಮೂಲ ಇಲಾಖೆ ಇವರನ್ನು (Chief Vigilance Officer) ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-572**

**SC-500**

**ಪಂಪನಗೌಡ ಮೇಲ್ಸೀಮೆ,**
ಸರ್ಕಾರದ ಅಧೀನ ಕಾರ್ಯದಶಿ,
ಜಲಸಂಪನ್ಮೂಲ ಇಲಾಖೆ. (ಸೇವೆಗಳು–ಎ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಜಲಸಂಪನ್ಮೂಲ ಇಲಾಖೆಯ ಕ್ಷೇತ್ರ ಇಲಾಖೆ/ನಿರ್ದೇಶನಾಲಯ/ಆಯುಕ್ತಾಲಯ/ ನಿಗಮ/ಮಂಡಳಿಗಳ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಿಗೆ ಜಾಗೃತ ಅಧಿಕಾರಿ (Vigilance Officer) ಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14.03.2016.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು 2016, ದಿನಾಂಕ: 22.06.2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 14.03.2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 22.06.2016ರ ಆದೇಶದಲ್ಲಿ ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿನಾಂಕ: 14.03.2016ರ ಸರ್ಕಾರದ ಆದೇಶಗಳಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ: 22.06.2016ರ ಆದೇಶದ ಆದೇಶ ಭಾಗದ ಕಂಡಿಕೆ 1(3)ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನು ಒಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದೆಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನ ಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾಮಟ್ಟದಲ್ಲಿ ಕಛೇರಿಗಳನ್ನು ಹೊಂದಿದ್ದು, ಸದರಿ ಕಛೇರಿಗಳಲ್ಲಿ ಗಣನೀಯ ಸಿಬ್ಬಂದಿ (Reasonable Strength) ಇದ್ದಲ್ಲಿ ಆ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದು ಹಾಗೂ ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಸದರಿ ಜಾಗೃತ ಕೋಶದ ಜಾಗೃತ ಅಧಿಕಾರಿ (Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ ಪರಿಶೀಲಿಸಿ, ಜಲಸಂಪನ್ಮೂಲ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಜಸಂಇ 99 ಸೇಇವಿ 2016, ಬೆಂಗಳೂರು, ದಿನಾಂಕ : 26–07–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಜಲಸಂಪನ್ಮೂಲ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿಗಳನ್ನು ಜಾಗೃತ ಅಧಿಕಾರಿಗಳಾಗಿ ನೇಮಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಕಛೇರಿ ಮತ್ತು ಕಛೇರಿಯ ಮುಖ್ಯಸ್ಥರು | ಕಛೇರಿ ಮುಖ್ಯಸ್ಥರ ನಂತರದ ಆಡಳಿತ ಮುಖ್ಯಸ್ಥರು |
|---|---|---|
| 1 | 2 | 3 |
| 1 | ವ್ಯವಸ್ಥಾಪಕ ನಿರ್ದೇಶಕರು, ಕೃ.ಭಾ.ಜ.ನಿ.ನಿ., ಆಲಮಟ್ಟಿ. | ಜನರಲ್ ಮ್ಯಾನೇಜರ್ (ಆಡಳಿತ), ವ್ಯವಸ್ಥಾಪಕ ನಿರ್ದೇಶಕರ ಕಛೇರಿ, ಕೃ.ಭಾ.ಜ.ನಿ.ನಿ., ಆಲಮಟ್ಟಿ. |
| 2 | ವ್ಯವಸ್ಥಾಪಕ ನಿರ್ದೇಶಕರು, ಕ.ನೀ.ನಿ.ನಿ., ಧಾರವಾಡ. | ಮುಖ್ಯ ಆಡಳಿತಾಧಿಕಾರಿ, ವ್ಯವಸ್ಥಾಪಕ ನಿರ್ದೇಶಕರ ಕಛೇರಿ, ಕ.ನೀ.ನಿ.ನಿ., ಧಾರವಾಡ. |

| ಕ್ರ.ಸಂ. | ಕಛೇರಿ ಮತ್ತು ಕಛೇರಿಯ ಮುಖ್ಯಸ್ಥರು | ಕಛೇರಿ ಮುಖ್ಯಸ್ಥರ ನಂತರದ ಆಡಳಿತ ಮುಖ್ಯಸ್ಥರು |
|---|---|---|
| 1 | 2 | 3 |
| 3 | ವ್ಯವಸ್ಥಾಪಕ ನಿರ್ದೇಶಕರು, ಕಾ.ನೀ.ನಿ.ನಿ., ಮೈಸೂರು. | ಮುಖ್ಯ ಆಡಳಿತಾಧಿಕಾರಿ, ವ್ಯವಸ್ಥಾಪಕ ನಿರ್ದೇಶಕರ ಕಛೇರಿ, ಕಾ.ನೀ.ನಿ.ನಿ., ಮೈಸೂರು. |
| 4 | ನಿರ್ದೇಶಕರು, ಕಾಡಾ ನಿರ್ದೇಶನಾಲಯ, ಬೆಂಗಳೂರು. | ಉಪ ನಿರ್ದೇಶಕರು (ಆಡಳಿತ), ನಿರ್ದೇಶಕರ ಕಛೇರಿ, ಕಾಡಾ ನಿರ್ದೇಶನಾಲಯ, ಬೆಂಗಳೂರು. |
| 5 | ಆಡಳಿತಾಧಿಕಾರಿ ಕಾಡಾ, ಮೈಸೂರು. | ಉಪ ಆಡಳಿತಾಧಿಕಾರಿ, ಆಡಳಿತಾಧಿಕಾರಿರವರ ಕಛೇರಿ, ಕಾಡಾ, ಮೈಸೂರು. |
| 6 | ಆಡಳಿತಾಧಿಕಾರಿ, ಕಾಡಾ, ಮುನಿರಾಬಾದ್. | ಉಪ ಆಡಳಿತಾಧಿಕಾರಿ, ಆಡಳಿತಾಧಿಕಾರಿರವರ ಕಛೇರಿ, ಕಾಡಾ, ಮುನಿರಾಬಾದ್. |
| 7 | ಆಡಳಿತಾಧಿಕಾರಿ, ಕಾಡಾ, ಶಿವಮೊಗ್ಗ. | ಉಪ ಆಡಳಿತಾಧಿಕಾರಿ, ಆಡಳಿತಾಧಿಕಾರಿರವರ ಕಛೇರಿ, ಕಾಡಾ, ಶಿವಮೊಗ್ಗ. |
| 8 | ಆಡಳಿತಾಧಿಕಾರಿ, ಕಾಡಾ, ಬೆಳಗಾವಿ. | ಉಪ ಆಡಳಿತಾಧಿಕಾರಿ, ಆಡಳಿತಾಧಿಕಾರಿ ಕಛೇರಿ, ಕಾಡಾ, ಬೆಳಗಾವಿ. |
| 9 | ಆಡಳಿತಾಧಿಕಾರಿ, ಕಾಡಾ, ಕಲಬುರಗಿ. | ಮುಖ್ಯ ಲೆಕ್ಕಾಧಿಕಾರಿ, ಆಡಳಿತಾಧಿಕಾರಿರವರ ಕಛೇರಿ, ಕಾಡಾ, ಕಲಬುರಗಿ. |
| 10 | ಆಡಳಿತಾಧಿಕಾರಿ, ಕಾಡಾ, ಭೀಮರಾಯನಗುಡಿ. | ಉಪ ಆಡಳಿತಾಧಿಕಾರಿ, ಆಡಳಿತಾಧಿಕಾರಿರವರ ಕಛೇರಿ, ಕಾಡಾ, ಭೀಮರಾಯನಗುಡಿ. |
| 11 | ಮುಖ್ಯ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು. |
| 12 | ಮುಖ್ಯ ಇಂಜಿನಿಯರ್, ಜಲವಿಜ್ಞಾನ ಮತ್ತು ಕೇಂದ್ರ ಯಾಂತ್ರಿಕ ಸಂಸ್ಥೆ, ಬೆಂಗಳೂರು. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಜಲವಿಜ್ಞಾನ ಮತ್ತು ಕೇಂದ್ರ ಯಾಂತ್ರಿಕ ಸಂಸ್ಥೆ, ಬೆಂಗಳೂರು. |
| 13 | ಮುಖ್ಯ ಇಂಜಿನಿಯರ್, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ. |
| 14 | ಮುಖ್ಯ ಇಂಜಿನಿಯರ್, ಕನೀನಿನಿ, ಭದ್ರಾ ಮೇಲ್ದಂಡೆ ಯೋಜನಾ ವಲಯ, ಚಿತ್ರದುರ್ಗ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕನೀನಿನಿ, ಭದ್ರಾ ಮೇಲ್ದಂಡೆ ಯೋಜನಾ ವಲಯ, ಚಿತ್ರದುರ್ಗ. |
| 15 | ಮುಖ್ಯ ಇಂಜಿನಿಯರ್, ಕನೀನಿನಿ, ಮಲಪ್ರಭಾ ಯೋಜನಾ ವಲಯ, ಧಾರವಾಡ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕನೀನಿನಿ, ಮಲಪ್ರಭಾ ಯೋಜನಾ ವಲಯ, ಧಾರವಾಡ. |
| 16 | ಮುಖ್ಯ ಇಂಜಿನಿಯರ್, ಕನೀನಿನಿ, ನೀರಾವರಿ (ಉತ್ತರ) ವಲಯ, ಬೆಳಗಾವಿ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್ ಕಛೇರಿ, ಕನೀನಿನಿ, ನೀರಾವರಿ (ಉತ್ತರ) ವಲಯ, ಬೆಳಗಾವಿ. |
| 17 | ಮುಖ್ಯ ಇಂಜಿನಿಯರ್, ಕನೀನಿನಿ, ವರಾಹಿ ಯೋಜನಾ ವಲಯ, ಸಿದ್ಧಾಪುರ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕನೀನಿನಿ, ವರಾಹಿ ಯೋಜನಾ ವಲಯ, ಸಿದ್ಧಾಪುರ. |
| 18 | ಮುಖ್ಯ ಇಂಜಿನಿಯರ್, ಕಾನೀನಿನಿ, ನೀರಾವರಿ (ದಕ್ಷಿಣ) ವಲಯ, ಮೈಸೂರು. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕಾನೀನಿನಿ, ನೀರಾವರಿ (ದಕ್ಷಿಣ) ವಲಯ, ಮೈಸೂರು. |
| 19 | ಮುಖ್ಯ ಇಂಜಿನಿಯರ್, ಕಾನೀನಿನಿ, ಹೇಮಾವತಿ ಯೋಜನಾ ವಲಯ, ಗೊರೂರು. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕಾನೀನಿನಿ, ಹೇಮಾವತಿ ಯೋಜನಾ ವಲಯ, ಗೊರೂರು. |
| 20 | ಮುಖ್ಯ ಇಂಜಿನಿಯರ್, ಕಾನೀನಿನಿ, ಹೇಮಾವತಿ ನಾಲಾ ವಲಯ, ತುಮಕೂರು. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕಾನೀನಿನಿ, ಹೇಮಾವತಿ ನಾಲಾ ವಲಯ, ತುಮಕೂರು. |
| 21 | ಮುಖ್ಯ ಇಂಜಿನಿಯರ್, ಕೃಭಾಜನಿನಿ, ಅಣೆಕಟ್ಟು ವಲಯ, ಆಲಮಟ್ಟಿ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕೃಭಾಜನಿನಿ, ಅಣೆಕಟ್ಟು ವಲಯ, ಆಲಮಟ್ಟಿ. |

| ಕ್ರ.ಸಂ. | ಕಛೇರಿ ಮತ್ತು ಕಛೇರಿಯ ಮುಖ್ಯಸ್ಥರು | ಕಛೇರಿ ಮುಖ್ಯಸ್ಥರ ನಂತರದ ಆಡಳಿತ ಮುಖ್ಯಸ್ಥರು |
|---|---|---|
| 1 | 2 | 3 |
| 22 | ಮುಖ್ಯ ಇಂಜಿನಿಯರ್, ಕೃಭಾಜನಿನಿ, ಕಾಲುವೆ ವಲಯ ನಂ. 1, ಭೀಮರಾಯನಗುಡಿ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕೃಭಾಜನಿನಿ, ಕಾಲುವೆ ವಲಯ ನಂ. 1, ಭೀಮರಾಯನಗುಡಿ. |
| 23 | ಮುಖ್ಯ ಇಂಜಿನಿಯರ್, ಕೃಭಾಜನಿನಿ, ಕಾಲುವೆ ವಲಯ ನಂ. 2, ರಾಂಪೂರ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕೃಭಾಜನಿನಿ, ಕಾಲುವೆ ವಲಯ ನಂ. 2, ರಾಂಪೂರ. |
| 24 | ಮುಖ್ಯ ಇಂಜಿನಿಯರ್, ಕೃಭಾಜನಿನಿ, ಘೋಷಣೆ ಮತ್ತು ನಿರ್ವಹಣೆ ವಲಯ, ನಾರಾಯಣಪುರ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ಕೃಭಾಜನಿನಿ, ಘೋಷಣೆ ಮತ್ತು ನಿರ್ವಹಣೆ ವಲಯ, ನಾರಾಯಣಪುರ. |
| 25 | ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಮುನಿರಾಬಾದ್. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ನೀರಾವರಿ ಕೇಂದ್ರ ವಲಯ, ಮುನಿರಾಬಾದ್. |
| 26 | ಮುಖ್ಯ ಇಂಜಿನಿಯರ್, ನೀರಾವರಿ ಕೇಂದ್ರ ವಲಯ, ಕಲಬುರಗಿ. | ಸಹಾಯಕ ಆಡಳಿತಾಧಿಕಾರಿ, ಮುಖ್ಯ ಇಂಜಿನಿಯರ್‌ರವರ ಕಛೇರಿ, ನೀರಾವರಿ ಯೋಜನಾ ವಲಯ, ಕಲಬುರಗಿ. |
| 27 | ನಿರ್ದೇಶಕರು, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜಸಾಗರ. | ಪ್ರಾಂಶುಪಾಲರು, ನಿರ್ದೇಶಕರ ಕಛೇರಿ, ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜಸಾಗರ. |
| 28 | ಮುಖ್ಯ ಇಂಜಿನಿಯರಿಂಗ್, ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ. | ಅಧೀಕ್ಷಕ ಇಂಜಿನಿಯರ್, ಮುಖ್ಯ ಇಂಜಿನಿಯರ್‌ರವರ ಕಛೇರಿ, ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-573**

**SC-500**

**ಪಂಪನಗೌಡ ಮೇಲ್ಸೀಮೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ. (ಸೇವೆಗಳು–ಎ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಎತ್ತಿನಹೊಳೆ ಯೋಜನೆ ಹಾಗೂ ಭದ್ರಾ ಮೇಲ್ದಂಡೆ ಯೋಜನೆಯ ಅನುಷ್ಠಾನಕ್ಕಾಗಿ ವಿಶೇಷ ಜಿಲ್ಲಾಧಿಕಾರಿ/ವಿಶೇಷ ಭೂಸ್ವಾಧೀನಾಧಿಕಾರಿ ಕಛೇರಿಗಳನ್ನು ಸ್ಥಳಾಂತರಿಸುವ ಬಗ್ಗೆ – ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಜಸಂಇ 324 ಸೇಎಸು 2014, ದಿನಾಂಕ: 29.12.2014.
2. ಸರ್ಕಾರದ ಆದೇಶ ಸಂಖ್ಯೆ: ಜಸಂಇ 324 ಸೇಎಸು 2014, ದಿನಾಂಕ: 03.02.2015.
3. ಸರ್ಕಾರದ ಪತ್ರ ಸಂಖ್ಯೆ: ಜಸಂಇ 324 ಸೇಎಸು 2014 (ಭಾ–1), ದಿನಾಂಕ: 20.06.2015.
4. ಸರ್ಕಾರದ ಆದೇಶ ಸಂಖ್ಯೆ: ಜಸಂಇ 324 ಸೇಎಸು 2014, ದಿನಾಂಕ: 17.07.2015.
5. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕಾನೀನಿನಿ/ಆ/ಸಿ11/ಸಿ.ಆರ್.21/2016–17/1865, ದಿನಾಂಕ: 05.07.2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 29.12.2014ರಲ್ಲಿ, ಎತ್ತಿನಹೊಳೆ ಯೋಜನೆ ಹಾಗೂ ಭದ್ರಾ ಮೇಲ್ದಂಡೆ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ವಿಶೇಷ ಜಿಲ್ಲಾಧಿಕಾರಿ/ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಗಳನ್ನು ಎನ್–ಬ್ಲಾಕ್ ಆಗಿ ಸಿಬ್ಬಂದಿಗಳೊಂದಿಗೆ ಸ್ಥಳಾಂತರಿಸಿ, ಕಛೇರಿಗಳನ್ನು ಪ್ರಾರಂಭಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 03.02.2015ರ ಆದೇಶದಲ್ಲಿ, ಎತ್ತಿನಹೊಳೆ ಯೋಜನೆ ಹಾಗೂ ಭದ್ರಾ ಮೇಲ್ದಂಡೆ ಯೋಜನೆಯ ಅನುಷ್ಠಾನಕ್ಕಾಗಿ ವಿಶೇಷ ಜಿಲ್ಲಾಧಿಕಾರಿ/ವಿಶೇಷ ಭೂಸ್ವಾಧೀನಾಧಿಕಾರಿ ಕಛೇರಿಗಳನ್ನು ಸ್ಥಳಾಂತರಿಸಿರುವ ಕಛೇರಿಗಳ ಕಾರ್ಯವ್ಯಾಪ್ತಿಯನ್ನು ನಿಗಧಿಪಡಿಸಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ: 20.06.2015ರ ಪತ್ರದಲ್ಲಿ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಭದ್ರಾ ಮೇಲ್ದಂಡೆ ಯೋಜನೆ, ಚಿತ್ರದುರ್ಗ ಇಲ್ಲಿಗೆ ಸ್ಥಳಾಂತರಗೊಂಡಿರುವ ಕಛೇರಿಯ ಕಾರ್ಯಭಾರದೊಂದಿಗೆ ತಾತ್ಕಾಲಿಕವಾಗಿ ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಕಛೇರಿಯ ಕಾರ್ಯಭಾರವನ್ನು ವಾರದಲ್ಲಿ ಒಂದು ದಿನ ತಮ್ಮ ಸಿಬ್ಬಂದಿಯೊಂದಿಗೆ ನಿರ್ವಹಿಸಲು ತಿಳಿಸಲಾಗಿದೆ. ಇದನ್ನು ಉಲ್ಲೇಖ(4)ರ ದಿನಾಂಕ: 17.07.2015ರ ಆದೇಶದಲ್ಲಿ ಉಲ್ಲೇಖ(1) ಮತ್ತು (2)ರ ದಿನಾಂಕ: 29.12.2014 ಮತ್ತು 03.02.2015ರ ಆದೇಶಗಳನ್ನು ಭಾಗಶಃ ಮಾರ್ಪಡಿಸಿ, ವಿಶೇಷ ಭೂಸ್ವಾಧೀನಾಧಿಕಾರಿ, ಭದ್ರಾ ಮೇಲ್ದಂಡೆ ಯೋಜನೆ, ಚಿತ್ರದುರ್ಗ, ಇಲ್ಲಿಗೆ ಸ್ಥಳಾಂತರಿಸಿರುವ ವಿಶೇಷ ಭೂಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಇಲ್ಲಿನ ಕಛೇರಿಯ ಸಿಬ್ಬಂದಿಗಳನ್ನು ವಿಭಜಿಸಿ ಶಿವಮೊಗ್ಗ ವಿಭಾಗದ ಭೂಸ್ವಾಧೀನ ಪ್ರಕರಣಗಳು ಪೂರ್ಣಗೊಳ್ಳುವವರೆಗೆ ವಿಶೇಷ ಭೂಸ್ವಾಧೀನಾಧಿಕಾರಿ, ಭದ್ರಾ ಮೇಲ್ದಂಡೆ ಯೋಜನೆ, ಚಿತ್ರದುರ್ಗ ಕಛೇರಿಯನ್ನು ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಯನ್ನು ಸಹ ಹೊಂದಿರುವಂತೆ ಶಿವಮೊಗ್ಗದಲ್ಲಿಯೂ ಮುಂದುವರೆಸಿ ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ: 05.07.2016ರ ಪ್ರಸ್ತಾವನೆಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ಇವರು ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಂಡ್ಯ ಕಛೇರಿಯ ಎಲ್ಲಾ ಕಡತಗಳ ಸಂಪೂರ್ಣ ಪ್ರಭಾರವನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ರವರಿಗೆ ವಹಿಸಿ, ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಂಡ್ಯ ಕಛೇರಿಯನ್ನು ಹುದ್ದೆಗಳ ಸಮೇತ ಎನ್-ಬ್ಲಾಕ್ ಆಗಿ ಹಾಸನ ಜಿಲ್ಲಾ ಕೇಂದ್ರಕ್ಕೆ ಸ್ಥಳಾಂತರಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ, ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಂಡ್ಯ ಕಛೇರಿಯು ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕು, ಮದ್ದೂರು, ಮಳವಳ್ಳಿ, ನಾಗಮಂಗಲ, ಕೆ.ಆರ್.ಪೇಟೆ, ಶ್ರೀರಂಗಪಟ್ಟಣ, ಪಾಂಡವಪುರ ತಾಲ್ಲೂಕುಗಳನ್ನೊಳಗೊಂಡಂತೆ ಒಟ್ಟು 07 ತಾಲ್ಲೂಕು ವ್ಯಾಪ್ತಿಯನ್ನು ಹೊಂದಿದ್ದು, ಈ ವ್ಯಾಪ್ತಿಯಲ್ಲಿ ಬರುವ ವಿವಿಧ ಯೋಜನೆಗಳ ಭೂಸ್ವಾಧೀನ ಪ್ರಕ್ರಿಯೆಗಳನ್ನು ಹಾಗೂ ಭೂಸ್ವಾಧೀನ ಪರಿಹಾರ ಪಡೆದ ಭೂಮಾಲೀಕರು ಹೆಚ್ಚುವರಿ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಿದ್ದು, ಇವುಗಳನ್ನು ಇತ್ಯರ್ಥಪಡಿಸುವುದು ವಿಶೇಷ ಭೂಸ್ವಾಧೀನಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಂಡ್ಯ ರವರಲ್ಲಿ ಪ್ರಸ್ತುತ ನಿಗಮದ 4 ಪ್ರಕರಣಗಳು ಮಾತ್ರ ಬಾಕಿ ಇದ್ದು, 26–00 ಎಕರೆ ಪ್ರದೇಶವನ್ನು ಭೂಸ್ವಾಧೀನಪಡಿಸಿಕೊಳ್ಳಲು ಬಾಕಿ ಇರುತ್ತದೆ. ಮುಂದುವರೆದು, ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ವ್ಯಾಪ್ತಿಗೆ 04 ತಾಲ್ಲೂಕುಗಳಾದ, ರಾಮನಗರ, ಚನ್ನಪಟ್ಟಣ, ಕನಕಪುರ, ಮಾಗಡಿ ತಾಲ್ಲೂಕುಗಳು ಒಳಪಟ್ಟಿದ್ದು, ನಿಗಮದ 09 ಭೂಸ್ವಾಧೀನ ಪ್ರಕರಣಗಳು ಬಾಕಿ ಇದ್ದು, 64–34.08 ಎಕರೆ ವಿಸ್ತೀರ್ಣದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಬಾಕಿ ಇರುತ್ತದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಂಡ್ಯ ಕಛೇರಿಗೆ ಸಂಬಂಧಿಸಿದ ಮಂಜೂರಾದ, ಕಾರ್ಯ ನಿರತ ಹಾಗೂ ಖಾಲಿ ಹುದ್ದೆಗಳ ವಿವರ ಕೆಳಕಂಡಂತಿರುತ್ತದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಹಾಲಿ ಕಾರ್ಯ ನಿರ್ವಹಿಸುತ್ತಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ವಿಶೇಷ ಭೂಸ್ವಾಧೀನಾಧಿಕಾರಿಗಳು | 01 | 01 | – |
| 2 | ಪ್ರಥಮ ದರ್ಜೆ ಸಹಾಯಕರು | 02 | 01 | 01 |
| 3 | ದ್ವಿತೀಯ ದರ್ಜೆ ಸಹಾಯಕರು | 02 | 02 | – |
| 4 | ಶೀಘ್ರಲಿಪಿಗಾರರು | 01 | – | 01 |
| 5 | ದ್ವಿತೀಯ ದರ್ಜೆ ರಾಜಸ್ವ ನಿರೀಕ್ಷಕರು | 01 | 01 | – |
| 6 | ದ್ವಿತೀಯ ದರ್ಜೆ ಭೂಮಾಪಕರು | 02 | – | 02 |
| 7 | ನೋಟೀಸ್ ಜಾರಿದಾರರು | 02 | 01 | 01 |
| 8 | ಗ್ರೂಪ್ "ಡಿ" ನೌಕರರು | 05 | 02 | 03 |
| | **ಒಟ್ಟು** | **16** | **08** | **08** |

ಎತ್ತಿನಹೊಳೆ ಯೋಜನೆ ಹಾಗೂ ಭದ್ರಾ ಮೇಲ್ದಂಡೆ ಯೋಜನೆಯ ಅನುಷ್ಠಾನಕ್ಕಾಗಿ ಹಾಸನ ಜಿಲ್ಲಾ ವ್ಯಾಪ್ತಿಯಲ್ಲಿ ನಿಗಮದ ಭೂಸ್ವಾಧೀನ ಪ್ರಕ್ರಿಯೆಗಳನ್ನು ಕೈಗೊಳ್ಳುವ ಸಂಬಂಧ ಕಾರ್ಯ ನಿರ್ವಹಿಸುತ್ತಿದ್ದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹೇಮಾವತಿ ಜಲಾಶಯ ಯೋಜನೆ, ಹಾಸನ ಕಛೇರಿಯ ಕಾರ್ಯಭಾರವನ್ನು ಉಪವಿಭಾಗಾಧಿಕಾರಿಗಳು, ಹಾಸನ ಜಿಲ್ಲಾ ಉಪವಿಭಾಗ, ಹಾಸನ ಇವರಿಗೆ ವಿಲೀನಗೊಳಿಸಿ, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಎತ್ತಿನಹೊಳೆ ಯೋಜನೆ, ಸಕಲೇಶಪುರ ಇಲ್ಲಿ ಪ್ರಾರಂಭಿಸಲು ಉಲ್ಲೇಖ(1)ರ ದಿನಾಂಕ: 29.12.2014ರ ಆದೇಶದಲ್ಲಿ ಎನ್-ಬ್ಲಾಕ್ ಆಗಿ ಸ್ಥಳಾಂತರಿಸಲಾಗಿದೆ. ಅದರಂತೆ, ವಿಶೇಷ ಭೂಸ್ವಾಧೀನಾಧಿಕಾರಿ, ಹಾಸನ ಕಛೇರಿಯ ವ್ಯಾಪ್ತಿಯಲ್ಲಿನ ಹಾಸನ, ಹೊಳೆನರಸೀಪುರ, ಚನ್ನರಾಯಪಟ್ಟಣ, ಅರಕಲಗೂಡು, ಬೇಲೂರು, ಆಲೂರು, ಕೆ.ಆರ್.ನಗರ (ಭಾಗಶಃ) ಸೋಮವಾರಪೇಟೆ (ಭಾಗಶಃ) ಒಟ್ಟು 08 ತಾಲ್ಲೂಕುಗಳಲ್ಲಿನ ವಿವಿಧ ಯೋಜನೆಗಳ ಭೂಸ್ವಾಧೀನ ಪ್ರಕ್ರಿಯೆ, ನ್ಯಾಯಾಲಯ ಪ್ರಕರಣಗಳು, ಕಲಂ 28(ಎ) ಪ್ರಕರಣಗಳನ್ನು ಉಪ ವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿ ಹಾಸನ ಉಪ ವಿಭಾಗ ರವರಿಗೆ ಹಸ್ತಾಂತರಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ರವರಿಗೆ ಕಂದಾಯ ಇಲಾಖೆಯ ಅಪೀಲುಗಳು, ಸರ್ಕಾರಿ ಜಮೀನು ಒತ್ತುವರಿ ತೆರವು/ಚುನಾವಣಾ ಕಾರ್ಯಗಳು/ಜನಗಣತಿ ಕಾರ್ಯದ ಮೇಲ್ವಿಚಾರಣೆ ಜೊತೆಗೆ ಉಪ ವಿಭಾಗ ವ್ಯಾಪ್ತಿಯ 4 ತಾಲ್ಲೂಕುಗಳಾದ ಹಾಸನ, ಹೊಳೆನರಸೀಪುರ, ಅರಸೀಕೆರೆ, ಚನ್ನರಾಯಪಟ್ಟಣ ತಾಲ್ಲೂಕುಗಳ ಮೇಲ್ವಿಚಾರಣೆ, ಕಾನೂನು ಮತ್ತು ಸುವ್ಯವಸ್ಥೆ ಪಾಲನೆ, ಶಿಷ್ಟಾಚಾರ ವ್ಯವಸ್ಥೆಯನ್ನು ನೋಡಿಕೊಳ್ಳಬೇಕಾಗಿದೆ. ಈ ಕೆಲಸಗಳ ಜೊತೆಯಲ್ಲಿ ನಿಗಮ ವ್ಯಾಪ್ತಿಯ, ಹೇಮಾವತಿ, ಯಗಚಿ, ವಾಟೇಹೊಳೆ, ಹಾರಂಗಿ ಯೋಜನೆಗಳ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಗೊಳ್ಳಲಾಗುತ್ತಿದ್ದು, ಭೂಸ್ವಾಧೀನ ಕಾರ್ಯ ವ್ಯಾಪ್ತಿಯು ಹಾಸನ ಜಿಲ್ಲೆಯ, ಹಾಸನ, ಬೇಲೂರು, ಹೊಳೆನರಸೀಪುರ, ಅರಕಲಗೂಡು, ಚನ್ನರಾಯಪಟ್ಟಣ, ಆಲೂರು, ಸಕಲೇಶಪುರ ತಾಲ್ಲೂಕುಗಳು ಭಾಗಶಃ ಮೈಸೂರು ಜಿಲ್ಲೆಯ ಕೆ.ಆರ್.ನಗರ ಮತ್ತು ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕುಗಳು ಒಳಪಟ್ಟಿರುತ್ತವೆ.

ಪ್ರಸ್ತುತ ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಕಛೇರಿಯಲ್ಲಿ 08 ತಾಲ್ಲೂಕು ವ್ಯಾಪ್ತಿಯ ಪ್ರಾಥಮಿಕ ಹಂತದಲ್ಲಿರುವ 106 ಕ್ಕೂ ಅಧಿಕ ಪ್ರಕರಣಗಳು, ಅವಾರ್ಡ್ ಹಂತದಲ್ಲಿರುವ 48 ಪ್ರಕರಣಗಳು ಬಾಕಿ ಇರುತ್ತದೆ. 314 ಜಪ್ತಿ ಪ್ರಕರಣಗಳು, 1034 ಎಲ್.ಎ.ಸಿ. ಪ್ರಕರಣಗಳು ಹಾಗೂ 2743 ಅರ್ಜಿಗಳು ಕಲಂ 28(ಎ)ರಡಿ ಇತ್ಯರ್ಥಪಡಿಸಲು ಬಾಕಿ ಇರುತ್ತದೆ. ಇದಲ್ಲದೇ ಹೇಮಾವತಿ, ಯಗಚಿ, ವಾಟೇಹೊಳೆ, ಹಾರಂಗಿ ಜಲಾಶಯ ಯೋಜನೆಗಳ ಅನುಷ್ಠಾನದಿಂದ ನಿರಾಶ್ರಿತರಾದ ಸಂತ್ರಸ್ಥರಿಗೆ ಮನೆ, ನಿವೇಶನ ಜಮೀನು ಮಂಜೂರಾತಿ ಕೋರಿ ಬಂದಿರುವ ಪ್ರಸ್ತಾವನೆಗಳು, ಶೀತಪೀಡಿತ

ಪ್ರಕರಣಗಳು ಸಹ ಬಾಕಿ ಇರುತ್ತವೆ. **'ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ, ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ, ಪುನರ್ ನಿರ್ಮಾಣ ಕಾಯ್ದೆ 2013'** ರನ್ವಯ 106ಕ್ಕೂ ಅಧಿಕ ಪ್ರಕರಣಗಳಲ್ಲಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ.

ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ರವರಿಗೆ ಕಂದಾಯ ಇಲಾಖೆಯ ದೈನಂದಿನ ಕೆಲಸ ಕಾರ್ಯಗಳ ಒತ್ತಡದ ಜೊತೆಯಲ್ಲಿ, ನಿಗಮದ ಭೂಸ್ವಾಧೀನ, ನ್ಯಾಯಾಲಯ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು ಕಷ್ಟಸಾಧ್ಯವಾಗಿದ್ದು, ನಿಗಧಿತ ಅವಧಿಯೊಳಗೆ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಲು ಸಾಧ್ಯವಾಗದೇ, ಪ್ರಕರಣಗಳು ಅಸಿಂಧುವಾಗುವ ಸಾಧ್ಯತೆ ಉಂಟಾಗಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ಕಛೇರಿಯಲ್ಲಿ ಕೆಲಸದ ಒತ್ತಡ ಹೆಚ್ಚಾಗಿರುವುದರಿಂದ ನಿಗಮದಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಕೈಗೊಳ್ಳಲಾಗುತ್ತಿರುವ ನೀರಾವರಿ ಯೋಜನೆಗಳನ್ನು ನಿಗಧಿತ ಅವಧಿಯೊಳಗೆ ಅನುಷ್ಠಾನಗೊಳಿಸಲು ಸಾಧ್ಯವಾಗುತ್ತಿಲ್ಲವಾದ್ದರಿಂದ, ಕಾವೇರಿ ನೀರಾವರಿ ನಿಗಮ ನಿಯಮಿತದ ಹಾಸನ ಜಿಲ್ಲಾ ವ್ಯಾಪ್ತಿಯ ಎಲ್ಲಾ ಭೂಸ್ವಾಧೀನ ಹಾಗೂ ಸಂಬಂಧಿಸಿದ ನ್ಯಾಯಾಲಯ ಪ್ರಕರಣಗಳನ್ನು ಇತ್ಯರ್ಥಪಡಿಸಲು ನಿರ್ದಿಷ್ಟವಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ ಅವಶ್ಯಕವಾಗಿ ಬೇಕಾಗಿರುತ್ತದೆ.

ಆದ್ದರಿಂದ ವಿಶೇಷ ಭೂಸ್ವಾಧೀನಾಧಿಕಾರಿ, ಮಂಡ್ಯ ವ್ಯಾಪ್ತಿಗೆ ಒಳಪಡುವ ಮಂಡ್ಯ, ಪಾಂಡವಪುರ, ಕೆ.ಆರ್.ಪೇಟೆ, ಮದ್ದೂರು, ಮಳವಳ್ಳಿ, ನಾಗಮಂಗಲ ತಾಲ್ಲೂಕುಗಳಲ್ಲಿ ಬರುವ 07 ತಾಲ್ಲೂಕುಗಳು, ಕಾವೇರಿ ನೀರಾವರಿ ನಿಗಮ ನಿಯಮಿತ ವ್ಯಾಪ್ತಿಯ ನ್ಯಾಯಾಲಯ ಪ್ರಕರಣಗಳು ಕಲಂ 28(ಎ) ಪ್ರಕರಣಗಳು ಹಾಗೂ ಭೂಸ್ವಾಧೀನ ಪ್ರಕ್ರಿಯೆಯನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ರವರಿಗೆ ಹಸ್ತಾಂತರಿಸುವಂತೆ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳು ಮಂಡ್ಯ ಕಛೇರಿಯನ್ನು ಮೇಲೆ ವಿವರಿಸಿರುವ ಸಿಬ್ಬಂದಿ ಬಲದೊಂದಿಗೆ, ಎನ್–ಬ್ಲಾಕ್ ಆಗಿ (ವೃಂದ ಬಲದೊಂದಿಗೆ) ಹಾಸನ ಜಿಲ್ಲಾ ಕೇಂದ್ರಕ್ಕೆ ಸ್ಥಳಾಂತರಿಸಿ ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ರವರು ಪ್ರಸ್ತುತ ನಿರ್ವಹಿಸುತ್ತಿರುವ ಹಾಸನ ಜಿಲ್ಲೆಯ, ಹಾಸನ ಹೊಳೆನರಸೀಪುರ, ಚನ್ನರಾಯಪಟ್ಟಣ, ಅರಕಲಗೂಡು, ಬೇಲೂರು, ಆಲೂರು, ಕೆ.ಆರ್. ನಗರ (ಭಾಗಶಃ) ಸೋಮವಾರಪೇಟೆ (ಭಾಗಶಃ) ತಾಲ್ಲೂಕುಗಳಲ್ಲಿ ನಿಗಮ ವ್ಯಾಪ್ತಿಯ ಭೂಸ್ವಾಧೀನ ಪ್ರಕರಣಗಳು, ಸಂಬಂಧಿಸಿದ ನ್ಯಾಯಾಲಯ ಪ್ರಕರಣಗಳು, ಕಲಂ 28(ಎ) ಪ್ರಕರಣಗಳು, ಶೀತಪೀಡಿತ ಪ್ರಕರಣಗಳು, ಪುರ್ನವಸತಿಗೆ ಸಂಬಂಧಿಸಿದ ಪ್ರಕರಣಗಳ ಸಂಪೂರ್ಣ ಪ್ರಭಾರವನ್ನು (ಕಡತಗಳು ಮತ್ತು ದಾಖಲೆಗಳೊಂದಿಗೆ) ಹಸ್ತಾಂತರಿಸಲು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಜಸಂಇ 324 ಸೇಎಸು 2014, ಬೆಂಗಳೂರು, ದಿನಾಂಕ : 20–07–2016.**

ವಿಶೇಷ ಭೂಸ್ವಾಧೀನಾಧಿಕಾರಿ, ಮಂಡ್ಯ ವ್ಯಾಪ್ತಿಗೆ ಒಳಪಡುವ ಮಂಡ್ಯ, ಪಾಂಡವಪುರ, ಕೆ.ಆರ್.ಪೇಟೆ, ಮದ್ದೂರು, ಮಳವಳ್ಳಿ, ನಾಗಮಂಗಲ ತಾಲ್ಲೂಕುಗಳಲ್ಲಿ ಬರುವ 07 ತಾಲ್ಲೂಕುಗಳು, ಕಾವೇರಿ ನೀರಾವರಿ ನಿಗಮ ನಿಯಮಿತ ವ್ಯಾಪ್ತಿಯ ನ್ಯಾಯಾಲಯ ಪ್ರಕರಣಗಳು 28(ಎ) ಪ್ರಕರಣಗಳು ಹಾಗೂ ಭೂಸ್ವಾಧೀನ ಪ್ರಕ್ರಿಯೆಯನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು, ರಾಮನಗರ ರವರಿಗೆ ಹಸ್ತಾಂತರಿಸುವಂತೆ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳು ಮಂಡ್ಯ ಕಛೇರಿಯನ್ನು ಈ ಕೆಳಕಂಡ ಸಿಬ್ಬಂದಿ ಬಲದೊಂದಿಗೆ, ಎನ್–ಬ್ಲಾಕ್ ಆಗಿ (ವೃಂದ ಬಲದೊಂದಿಗೆ) ಹಾಸನ ಜಿಲ್ಲಾ ಕೇಂದ್ರಕ್ಕೆ ಸ್ಥಳಾಂತರಿಸಿ, ಉಪ ವಿಭಾಗಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ರವರು ಪ್ರಸ್ತುತ ನಿರ್ವಹಿಸುತ್ತಿರುವ ಹಾಸನ ಜಿಲ್ಲೆಯ, ಹಾಸನ, ಹೊಳೆನರಸೀಪುರ, ಚನ್ನರಾಯಪಟ್ಟಣ, ಅರಕಲಗೂಡು, ಬೇಲೂರು, ಆಲೂರು, ಕೆ.ಆರ್.ನಗರ (ಭಾಗಶಃ) ಸೋಮವಾರಪೇಟೆ (ಭಾಗಶಃ) ತಾಲ್ಲೂಕುಗಳಲ್ಲಿ ಕಾವೇರಿ ನೀರಾವರಿ ನಿಗಮ ನಿಯಮಿತ ವ್ಯಾಪ್ತಿಯ ಭೂಸ್ವಾಧೀನ ಪ್ರಕರಣಗಳು, ಸಂಬಂಧಿಸಿದ ನ್ಯಾಯಾಲಯ ಪ್ರಕರಣಗಳು, 28(ಎ) ಪ್ರಕರಣಗಳ ಶೀತಪೀಡಿತ ಪ್ರಕರಣಗಳು, ಪುರ್ನವಸತಿಗೆ ಸಂಬಂಧಿಸಿದ ಪ್ರಕರಣಗಳ ಸಂಪೂರ್ಣ ಪ್ರಭಾರವನ್ನು (ಕಡತಗಳು ಮತ್ತು ದಾಖಲೆಗಳೊಂದಿಗೆ) ಹಸ್ತಾಂತರಿಸಲು ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಹಾಲಿ ಕಾರ್ಯ ನಿರ್ವಹಿಸುತ್ತಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1 | ವಿಶೇಷ ಭೂಸ್ವಾಧೀನಾಧಿಕಾರಿಗಳು | 01 | 01 | – |
| 2 | ಪ್ರಥಮ ದರ್ಜೆ ಸಹಾಯಕರು | 02 | 01 | 01 |
| 3 | ದ್ವಿತೀಯ ದರ್ಜೆ ಸಹಾಯಕರು | 02 | 02 | – |
| 4 | ಶೀಘ್ರಲಿಪಿಗಾರರು | 01 | 0 | 01 |
| 5 | ದ್ವಿತೀಯ ದರ್ಜೆ ರಾಜಸ್ವ ನಿರೀಕ್ಷಕರು | 01 | 01 | 0 |
| 6 | ದ್ವಿತೀಯ ದರ್ಜೆ ಭೂಮಾಪಕರು | 02 | 0 | 02 |
| 7 | ನೋಟೀಸ್ ಜಾರಿದಾರರು | 02 | 01 | 01 |
| 8 | ಗ್ರೂಪ್ "ಡಿ" ನೌಕರರು | 05 | 02 | 03 |
| | **ಒಟ್ಟು** | **16** | **08** | **08** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್.ಡಿ. 01 ಟಿ.ಎಫ್.ಪಿ. 96 ದಿನಾಂಕ: 10.07.1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಂಪನಗೌಡ ಮೇಲ್ಸೀಮೆ,**

ಸರ್ಕಾರದ ಅಧೀನ ಕಾರ್ಯದಶಿ,

ಸಂಪನ್ಮೂಲ ಇಲಾಖೆ. (ಸೇವೆಗಳು–ಎ)

**PR-574**

**SC-500**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಎತ್ತಿನಹೊಳೆ ಯೋಜನೆಯ ಅನುಷ್ಠಾನಕ್ಕಾಗಿ ಮುಖ್ಯ ಇಂಜಿನಿಯರ್, ವಾರಾಹಿ ಯೋಜನಾ ವಲಯ, ಸಿದ್ದಾಪುರ, ಉಡುಪಿ ಜಿಲ್ಲೆ ಕಛೇರಿ ಸಮೇತ ಹುದ್ದೆಗಳನ್ನು ಸ್ಥಳಾಂತರಿಸುವ ಹಾಗೂ ಸದರಿ ವಲಯದ ಅಧೀನದಲ್ಲಿರುವ ವೃತ್ತ, ವಿಭಾಗ ಹಾಗೂ ಉಪವಿಭಾಗ ಕಛೇರಿಗಳನ್ನು ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಇವರ ಆಡಳಿತ ವ್ಯಾಪ್ತಿಗೆ ಒಳಪಡಿಸುವ ಬಗ್ಗೆ – ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಜಸಂಇ 203 ವಿಬ್ಯಾಇ 2012, ದಿನಾಂಕ: 13.07.2012 ಮತ್ತು 17.02.14.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತದ ಇವರ ಪತ್ರ ಸಂಖ್ಯೆ: ಕನೀನಿನಿ/ವ್ಯನಿ/ಮುಇಂ/ಹುಸ್ಥ/2016–17/3363 ದಿನಾಂಕ: 20.06.2016.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಎತ್ತಿನಹೊಳೆ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ, ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರು ಎತ್ತಿನಹೊಳೆ ಯೋಜನೆ ಅನುಷ್ಠಾನಕ್ಕಾಗಿ ಕಾಮಗಾರಿಗಳನ್ನು ಕರ್ನಾಟಕ ನೀರಾವರಿ ನಿಗಮದ ವತಿಯಿಂದ ಕೈಗೊಳ್ಳಲಾಗುತ್ತಿದೆ. ಪ್ರಸ್ತುತ ಸದರಿ ಯೋಜನೆಯ ಉಸ್ತುವಾರಿಯನ್ನು ಮುಖ್ಯ ಇಂಜಿನಿಯರ್, ಭದ್ರಾ ಮೇಲ್ದಂಡೆ ಯೋಜನೆ, ಚಿತ್ರದುರ್ಗ ಇವರಿಂದ ನಿರ್ವಹಿಸಲಾಗುತ್ತಿದೆ. ಭದ್ರಾ ಮೇಲ್ದಂಡೆ ಯೋಜನೆಯ ಕಾಮಗಾರಿಗಳನ್ನು ಸಹ ನಿಗಧಿತ ಕಾಲಾವಧಿಯೊಳಗೆ ಪೂರೈಸಬೇಕಾಗಿರುವುದರಿಂದ ಒಬ್ಬರೆ ಮುಖ್ಯ ಇಂಜಿನಿಯರ್‌ರವರು ಎರಡು ಯೋಜನೆಗಳ ಕಾಮಗಾರಿಗಳನ್ನು ಉಸ್ತುವಾರಿ ಮಾಡಲು ಕಷ್ಟವಾಗುತ್ತಿದೆ. ವಾರಾಹಿ ಯೋಜನೆಯನ್ನು ಮುಖ್ಯ ಇಂಜಿನಿಯರ್, ವಾರಾಹಿ ಯೋಜನಾ ವಲಯ, ಸಿದ್ದಾಪುರ ಇವರಿಂದ ನಿರ್ವಹಿಸಲಾಗುತ್ತಿದೆ. ವಾರಾಹಿ ಯೋಜನೆಯ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿರುವುದರಿಂದ ಬಾಕಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಪ್ರತ್ಯೇಕ ಮುಖ್ಯ ಇಂಜಿನಿಯರ್ ಹುದ್ದೆಯ ಅವಶ್ಯಕತೆ ಇರುವುದಿಲ್ಲ. ಆದುದರಿಂದ, ಈ ಕೆಳಕಂಡ ಹುದ್ದೆಗಳ ಸಮೇತ ಮುಖ್ಯ ಇಂಜಿನಿಯರ್ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಲಯ, ಸಿದ್ದಾಪುರ ಕಛೇರಿಯನ್ನು ತುಮಕೂರು ಕೇಂದ್ರ ಸ್ಥಾನಕ್ಕೆ ಸ್ಥಳಾಂತರಿಸಲು ಪ್ರಸ್ತಾಪಿಸಿರುತ್ತಾರೆ.

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 1 | ಮುಖ್ಯ ಇಂಜಿನಿಯರ್ | 1 |
| 2 | ಕಾರ್ಯಪಾಲಕ ಇಂಜಿನಿಯರ್ | 1 |
| 3 | ಸಹಾಯಕ ಕಾರ್ಯಪಾಲಕ ಇಂಜಿನಿಯರ್/ ತಾಂತ್ರಿಕ ಸಹಾಯಕರು | 1 |
| 4 | ಸಹಾಯಕ ಇಂಜಿನಿಯರ್ | 2 |
| 5 | ಸಹಾಯಕ ಆಡಳಿತಾಧಿಕಾರಿ | 1 |
| 6 | ಲೆಕ್ಕಾಧೀಕ್ಷಕರು | 1 |
| 7 | ಪ್ರಥಮ ದರ್ಜೆ ಸಹಾಯಕರು | 1 |
| 8 | ಪ್ರಥಮ ದರ್ಜೆ ಲೆಕ್ಕ ಸಹಾಯಕರು | 3 |
| 9 | ದ್ವಿತೀಯ ದರ್ಜೆ ಸಹಾಯಕರು | 4 |
| 10 | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು | 3 |
| 11 | ಪ್ರಥಮ ದರ್ಜೆ ಭೂಮಾಪಕರು | 1 |
| 12 | ಪ್ರಥಮ ದರ್ಜೆ ಉಗ್ರಾಣಪಾಲಕರು | 1 |
| 13 | ದ್ವಿತೀಯ ದರ್ಜೆ ಉಗ್ರಾಣ ಪಾಲಕರು | 1 |
| 14 | ಬೆರಳಚ್ಚುಗಾರರು | 3 |
| 15 | ಜವಾನರು | 4 |
| 16 | ಚಾಲಕರು | 1 |
| 17 | ಕಾವಲುಗಾರರು | 2 |

ಹಾಗೂ ಪ್ರಸ್ತುತ ಮುಖ್ಯ ಇಂಜಿನಿಯರ್, ಕನೀನಿನಿ, ವಾರಾಹಿ ಯೋಜನಾ ವಲಯ, ಸಿದ್ದಾಪುರ, ಉಡುಪಿ ಇವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಕಛೇರಿಗಳನ್ನು ಮುಖ್ಯ ಇಂಜಿನಿಯರ್, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಇವರ ಆಡಳಿತ ವ್ಯಾಪ್ತಿಗೆ ಒಳಪಡಿಸಿ ಆದೇಶಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಕಛೇರಿ |
|---|---|
| 1 | ಅಧೀಕ್ಷಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವೃತ್ತ, ಸಿದ್ದಾಪುರ, ಉಡುಪಿ ಜಿಲ್ಲೆ. |
| 2 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ, ಸಿದ್ಧಾಪುರ, ಉಡುಪಿ ಜಿಲ್ಲೆ. |
| 3 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ–2, ಸಿದ್ಧಾಪುರ, ಉಡುಪಿ ಜಿಲ್ಲೆ. |
| 4 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–1, ಸಿದ್ಧಾಪುರ, ಉಡುಪಿ ಜಿಲ್ಲೆ. |
| 5 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–2, ಸಿದ್ಧಾಪುರ, ಉಡುಪಿ ಜಿಲ್ಲೆ. |
| 6 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–3, ಸಿದ್ಧಾಪುರ, ಉಡುಪಿ ಜಿಲ್ಲೆ. |
| 7 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–4, ಸಿದ್ಧಾಪುರ, ಉಡುಪಿ ಜಿಲ್ಲೆ. |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಗುಣ ನಿಯಂತ್ರಣ ಉಪವಿಭಾಗ–1, ಸಿದ್ಧಾಪುರ, ಉಡುಪಿ ಜಿಲ್ಲೆ. |

ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿದೆ. ವಾರಾಹಿ ಯೋಜನೆಯಡಿಯಲ್ಲಿ ಸುಮಾರು 10,000/– ಹೆಕ್ಟೇರ್ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಗಳನ್ನು ಬಹುತೇಕ ಪೂರ್ಣಗೊಳಿಸಲಾಗಿರುತ್ತದೆ. ಬಾಕಿ ಕಾಮಗಾರಿಗಳನ್ನು ವೃತ್ತ ಕಛೇರಿ ಹಂತದಲ್ಲಿಯೇ ನಿರ್ವಹಿಸಬಹುದಾಗಿದೆ. ತುಂಗಾ ಮೇಲ್ದಂಡೆ ಯೋಜನೆ ವ್ಯಾಪ್ತಿಯ ಬಹುತೇಕ ಕಾಮಗಾರಿಗಳು ಪೂರ್ಣಗೊಂಡಿರುವುದರಿಂದ, ವಾರಾಹಿ ಯೋಜನೆಯನ್ನು ಈ ವಲಯದಡಿ ತರಲು ತೀರ್ಮಾನಿಸಿದೆ.

ಮುಂದುವರೆದು, ಎತ್ತಿನಹೊಳೆ ಯೋಜನೆ ಮತ್ತು ಭದ್ರಾ ಮೇಲ್ದಂಡೆ ಯೋಜನೆಗಳ ಅನುಷ್ಠಾನಕ್ಕಾಗಿ ಪ್ರತ್ಯೇಕ ನಿಗಮ ಸ್ಥಾಪನೆ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಈ ಎರಡು ಬೃಹತ್ ಯೋಜನೆಗಳ ಉಸ್ತುವಾರಿಗೆ ಎರಡು ವಲಯಗಳ ಅವಶ್ಯಕತೆ ಇದೆ. ಭದ್ರಾ ಮೇಲ್ದಂಡೆ ಯೋಜನಾ ವಲಯ ಪ್ರಸ್ತುತ ಚಿತ್ರದುರ್ಗದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಈ ವಲಯದ ಅಡಿಯಲ್ಲಿಯೇ ಎತ್ತಿನಹೊಳೆ ಯೋಜನೆಯನ್ನು ತರಲಾಗಿದೆ. ಇದರಿಂದಾಗಿ ಭದ್ರಾ ಮೇಲ್ದಂಡೆ ಯೋಜನಾ ವಲಯಕ್ಕೆ ಕಾರ್ಯಭಾರದ ಒತ್ತಡ ಹೆಚ್ಚಾಗಿರುತ್ತದೆ.

ಆದುದರಿಂದ, ಮುಖ್ಯ ಇಂಜಿನಿಯರ್, ವಾರಾಹಿ ಯೋಜನಾ ವಲಯ, ಸಿದ್ಧಾಪುರ, ಉಡುಪಿ ಜಿಲ್ಲೆಯ ಕಛೇರಿಯನ್ನು ಈ ಕೆಳಕಂಡ ಹುದ್ದೆಗಳ ಸಮೇತ ತುಮಕೂರು ಕೇಂದ್ರ ಸ್ಥಾನಕ್ಕೆ ಸ್ಥಳಾಂತರಿಸಿ **'ಮುಖ್ಯ ಇಂಜಿನಿಯರ್ ಕಛೇರಿ, ಎತ್ತಿನಹೊಳೆ ಯೋಜನಾ ವಲಯ, ತುಮಕೂರು'** ಎಂದು ಆರಂಭಿಸಲು ಮತ್ತು ಇದನ್ನು ಸ್ಥಾಪಿತವಾಗಲಿರುವ ಹೊಸ ನಿಗಮದ ಅಡಿ ತರಲು

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 1 | ಮುಖ್ಯ ಇಂಜಿನಿಯರ್ | 1 |
| 2 | ಕಾರ್ಯಪಾಲಕ ಇಂಜಿನಿಯರ್ | 1 |
| 3 | ಸಹಾಯಕ ಕಾರ್ಯಪಾಲಕ ಇಂಜಿನಿಯರ್/ ತಾಂತ್ರಿಕ ಸಹಾಯಕರು | 1 |
| 4 | ಸಹಾಯಕ ಇಂಜಿನಿಯರ್ | 2 |
| 5 | ಸಹಾಯಕ ಆಡಳಿತಾಧಿಕಾರಿ | 1 |
| 6 | ಲೆಕ್ಕಾಧೀಕ್ಷಕರು | 1 |
| 7 | ಪ್ರಥಮ ದರ್ಜೆ ಸಹಾಯಕರು | 1 |
| 8 | ಪ್ರಥಮ ದರ್ಜೆ ಲೆಕ್ಕ ಸಹಾಯಕರು | 3 |
| 9 | ದ್ವಿತೀಯ ದರ್ಜೆ ಸಹಾಯಕರು | 4 |
| 10 | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು | 3 |

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 11 | ಪ್ರಥಮ ದರ್ಜೆ ಭೂಮಾಪಕರು | 1 |
| 12 | ಪ್ರಥಮ ದರ್ಜೆ ಉಗ್ರಾಣಪಾಲಕರು | 1 |
| 13 | ದ್ವಿತೀಯ ದರ್ಜೆ ಉಗ್ರಾಣ ಪಾಲಕರು | 1 |
| 14 | ಬೆರಳಚ್ಚುಗಾರರು | 3 |
| 15 | ಜವಾನರು | 4 |
| 16 | ಚಾಲಕರು | 1 |
| 17 | ಕಾವಲುಗಾರರು | 2 |

ಹಾಗೂ ಪ್ರಸ್ತುತ ಮುಖ್ಯ ಇಂಜಿನಿಯರ್, ಕನೀನಿನಿ, ವಾರಾಹಿ ಯೋಜನಾ ವಲಯ, ಸಿದ್ದಾಪುರ, ಉಡುಪಿ ಜಿಲ್ಲೆ, ಇವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಕಛೇರಿಗಳನ್ನು ಮುಖ್ಯ ಇಂಜಿನಿಯರ್, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಇವರ ಆಡಳಿತ ವ್ಯಾಪ್ತಿಗೆ ಒಳಪಡಿಸಲು ತೀರ್ಮಾನಿಸಿದೆ.

| ಕ್ರ.ಸಂ. | ಕಛೇರಿ |
|---|---|
| 1 | ಅಧೀಕ್ಷಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವೃತ್ತ, ಸಿದ್ದಾಪುರ, ಉಡುಪಿ ಜಿಲ್ಲೆ. |
| 2 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ, ಸಿದ್ದಾಪುರ, ಉಡುಪಿ ಜಿಲ್ಲೆ. |
| 3 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ–2, ಸಿದ್ದಾಪುರ, ಉಡುಪಿ ಜಿಲ್ಲೆ. |
| 4 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–1, ಸಿದ್ದಾಪುರ, ಉಡುಪಿ ಜಿಲ್ಲೆ. |
| 5 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–2, ಸಿದ್ದಾಪುರ, ಉಡುಪಿ ಜಿಲ್ಲೆ. |
| 6 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–3, ಸಿದ್ದಾಪುರ, ಉಡುಪಿ ಜಿಲ್ಲೆ. |
| 7 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–4, ಸಿದ್ದಾಪುರ, ಉಡುಪಿ ಜಿಲ್ಲೆ. |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಗುಣ ನಿಯಂತ್ರಣ ಉಪವಿಭಾಗ–1, ಸಿದ್ದಾಪುರ, ಉಡುಪಿ ಜಿಲ್ಲೆ. |

ಅದರಂತೆ ಈ ಕೆಳಕಂಡ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಜಸಂಇ 128 ಸೇಎಸು 2016, ಬೆಂಗಳೂರು, ದಿನಾಂಕ : 29–07–2016.**

ಮುಖ್ಯ ಇಂಜಿನಿಯರ್, ವಾರಾಹಿ ಯೋಜನಾ ವಲಯ, ಸಿದ್ದಾಪುರ, ಉಡುಪಿ ಜಿಲ್ಲೆಯ ಕಛೇರಿಯನ್ನು ಈ ಕೆಳಕಂಡ ಹುದ್ದೆಗಳ ಸಮೇತ ತುಮಕೂರು ಕೇಂದ್ರ ಸ್ಥಾನಕ್ಕೆ ಸ್ಥಳಾಂತರಿಸಿ **'ಮುಖ್ಯ ಇಂಜಿನಿಯರ್ ಕಛೇರಿ, ಎತ್ತಿನಹೊಳೆ ಯೋಜನಾ ವಲಯ, ತುಮಕೂರು'** ಎಂದು ಆರಂಭಿಸಲು ಮತ್ತು ಇದನ್ನು ಸ್ಥಾಪಿತವಾಗಲಿರುವ ಹೊಸ ನಿಗಮದ ಅಡಿ ತರಲು.

| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 1 | ಮುಖ್ಯ ಇಂಜಿನಿಯರ್ | 1 |
| 2 | ಕಾರ್ಯಪಾಲಕ ಇಂಜಿನಿಯರ್ | 1 |
| 3 | ಸಹಾಯಕ ಕಾರ್ಯಪಾಲಕ ಇಂಜಿನಿಯರ್/ ತಾಂತ್ರಿಕ ಸಹಾಯಕರು | 1 |
| 4 | ಸಹಾಯಕ ಇಂಜಿನಿಯರ್ | 2 |
| 5 | ಸಹಾಯಕ ಆಡಳಿತಾಧಿಕಾರಿ | 1 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ಹುದ್ದೆ | ಸಂಖ್ಯೆ |
|---|---|---|
| 6 | ಲೆಕ್ಕಾಧೀಕ್ಷಕರು | 1 |
| 7 | ಪ್ರಥಮ ದರ್ಜೆ ಸಹಾಯಕರು | 1 |
| 8 | ಪ್ರಥಮ ದರ್ಜೆ ಲೆಕ್ಕ ಸಹಾಯಕರು | 3 |
| 9 | ದ್ವಿತೀಯ ದರ್ಜೆ ಸಹಾಯಕರು | 4 |
| 10 | ದ್ವಿತೀಯ ದರ್ಜೆ ಲೆಕ್ಕ ಸಹಾಯಕರು | 3 |
| 11 | ಪ್ರಥಮ ದರ್ಜೆ ಭೂಮಾಪಕರು | 1 |
| 12 | ಪ್ರಥಮ ದರ್ಜೆ ಉಗ್ರಾಣ ಪಾಲಕರು | 1 |
| 13 | ದ್ವಿತೀಯ ದರ್ಜೆ ಉಗ್ರಾಣ ಪಾಲಕರು | 1 |
| 14 | ಬೆರಳಚ್ಚುಗಾರರು | 3 |
| 15 | ಜವಾನರು | 4 |
| 16 | ಚಾಲಕರು | 1 |
| 17 | ಕಾವಲುಗಾರರು | 2 |

ಹಾಗೂ ಪ್ರಸ್ತುತ ಮುಖ್ಯ ಇಂಜಿನಿಯರ್, ಕನೀನಿನಿ, ವಾರಾಹಿ ಯೋಜನಾ ವಲಯ, ಸಿದ್ದಾಪುರ, ಉಡುಪಿ ಇವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಕಛೇರಿಗಳನ್ನು ಮುಖ್ಯ ಇಂಜಿನಿಯರ್, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಇವರ ಆಡಳಿತ ವ್ಯಾಪ್ತಿಗೆ ಒಳಪಡಿಸಿ ಆದೇಶಿಸಿದೆ.

| ಕ್ರ.ಸಂ. | ಕಛೇರಿ |
|---|---|
| 1 | ಅಧೀಕ್ಷಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವೃತ್ತ, ಸಿದ್ದಾಪುರ, ಉಡುಪಿ ಜಿಲ್ಲೆ. |
| 2 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ, ಸಿದ್ದಾಪುರ, ಉಡುಪಿ ಜಿಲ್ಲೆ. |
| 3 | ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ವಿಭಾಗ–2, ಸಿದ್ಧಾಪುರ, ಉಡುಪಿ ಜಿಲ್ಲೆ. |
| 4 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–1, ಸಿದ್ದಾಪುರ, ಉಡುಪಿ ಜಿಲ್ಲೆ. |
| 5 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–2, ಸಿದ್ದಾಪುರ, ಉಡುಪಿ ಜಿಲ್ಲೆ. |
| 6 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–3, ಸಿದ್ದಾಪುರ, ಉಡುಪಿ ಜಿಲ್ಲೆ. |
| 7 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ವಾರಾಹಿ ಯೋಜನಾ ಉಪವಿಭಾಗ–4, ಸಿದ್ದಾಪುರ, ಉಡುಪಿ ಜಿಲ್ಲೆ. |
| 8 | ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಗುಣ ನಿಯಂತ್ರಣ ಉಪವಿಭಾಗ–1, ಸಿದ್ದಾಪುರ, ಉಡುಪಿ ಜಿಲ್ಲೆ. |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್.ಡಿ. 01 ಟಿ.ಎಫ್.ಪಿ. 96 ದಿನಾಂಕ: 10.07.1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಂಪನಗೌಡ ಮೇಲ್ಸೀಮೆ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ. (ಸೇವೆಗಳು–ಎ)

**PR-575**
**SC-500**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.